# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1049(1281) |
| ಸದಸ್ಯರ ಹೆಸರು | : | ಶ್ರೀ ಐವನ್ ಡಿ'ಸೋಜಾ<br>(ನಾಮ ನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | : | 17-03-2020 |
| ಉತ್ತರಿಸುವ ಸಚಿವರು | : | ಮಾನ್ಯ ನಗರಾಭಿವೃದ್ಧಿ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಮಂಗಳೂರು ಮಹಾನಗರಪಾಲಿಕೆಯಲ್ಲಿ ತುಂಬೆ ಕಿಂಡಿ ಅಣೆಕಟ್ಟಿನಲ್ಲಿ ನೀರಿನ ಮಟ್ಟವನ್ನು ಏರಿಸಿ ಮಂಗಳೂರು ನಗರಕ್ಕೆ ಮತ್ತು ಸುತ್ತಮುತ್ತಲಿನ ಗ್ರಾಮಗಳಿಗೆ 24x7 ನೀರನ್ನು ಒದಗಿಸಲು ಸರ್ಕಾರಕ್ಕೆ ತಗಲುವ ವೆಚ್ಚ ಎಷ್ಟು; ಇದನ್ನು ಸರ್ಕಾರವು ಪೂರೈಸಲು ಸಾಧ್ಯವಾಗುವುದೇ; (ವಿವರ ನೀಡುವುದು) | ಮಂಗಳೂರು ಮಹಾನಗರಪಾಲಿಕೆಗೆ ನೀರು ಪೂರೈಕೆಯಾಗುವ ತುಂಬೆ ಕಿಂಡಿ ಅಣೆಕಟ್ಟನ್ನು 7.00 ಮೀ ಎತ್ತರಕ್ಕೆ ನೀರನ್ನು ನಿಲ್ಲಿಸಲು (14.78 ಮಿಲಿಯನ್ ಕ್ಯುಬಿಕ್ ಮೀಟರ್) ವಿನ್ಯಾಸ ಮಾಡಲಾಗಿದ್ದು, ಮಂಗಳೂರು ನಗರಕ್ಕೆ ಹಾಗೂ ಮಾರ್ಗ ಮಧ್ಯದಲ್ಲಿ ಬರುವ ಗ್ರಾಮಗಳಿಗೆ ಮುಂದಿನ 30 ವರ್ಷಗಳ ಜನಸಂಖ್ಯೆಗಳಗನುಗುಣವಾಗಿ ವಿನ್ಯಾಸ ಮಾಡಲಾಗಿರುತ್ತದೆ.<br><br>ಮಂಗಳೂರು ಮಹಾನಗರಪಾಲಿಕೆ ಮತ್ತು ತುಂಬೆಯಿಂದ ಮಹಾನಗರಪಾಲಿಕೆವರೆಗೆ ಮಾರ್ಗ ಮಧ್ಯದಲ್ಲಿ ಬರುವ ಗ್ರಾಮಗಳಿಗೆ 24/7 ನೀರನ್ನು ಒದಗಿಸಲು 'ಜಲಸಿರಿ' ಯೋಜನೆಯಲ್ಲಿ ರೂ.792.42 ಕೋಟಿ ಮೊತ್ತದ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು, ಕಾಮಗಾರಿಯನ್ನು ಪ್ರಾರಂಭಿಸಲಾಗಿರುತ್ತದೆ. |
| ಆ) | ಮಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಹಲವಾರು ವರ್ಷಗಳಿಂದ ಕುಡಿಯುವ ನೀರಿನ ಸಮಸ್ಯೆಗಳಿದ್ದು, ಕಿಂಡಿ ಅಣೆಕಟ್ಟಿನ ನೀರಿನ ಮಟ್ಟ ಏರಿಸಿದಲ್ಲಿ 24x7 ನೀರಿನ ಪೂರೈಕೆ ಯೋಜನೆ ಸ್ಮಾರ್ಟ್‌ಸಿಟಿ ಯೋಜನೆಗೆ ಸೇರಿಸಲು ಸರ್ಕಾರ ನಿರ್ದೇಶನ ನೀಡುವುದೇ ಇದಕ್ಕಾಗಿ ಸರ್ಕಾರಕ್ಕೆ ಏನಾದರೂ ತೊಂದರೆಗಳಿದೆಯೇ: (ವಿವರ ನೀಡುವುದು) ಈ ಯೋಜನೆಗೆ ತಗಲುವ ವೆಚ್ಚ ಎಷ್ಟು; (ವಿವರ ನೀಡುವುದು) | ಮಂಗಳೂರು ಮಹಾನಗರಪಾಲಿಕೆಗೆ ನೀರು ಪೂರೈಕೆಯಾಗುವ ತುಂಬೆ ಕಿಂಡಿ ಅಣೆಕಟ್ಟನ್ನು 7.00 ಮೀ ಎತ್ತರಕ್ಕೆ ನೀರನ್ನು ಸಂಗ್ರಹಿಸಲು ವಿನ್ಯಾಸ ಮಾಡಲಾಗಿದ್ದು, ಪ್ರಸಕ್ತ ಸಾಲಿನಲ್ಲಿ 6.00 ಮೀ ಎತ್ತರಕ್ಕೆ ನೀರನ್ನು ಸಂಗ್ರಹಿಸಲಾಗಿರುತ್ತದೆ. 6.00 ರಿಂದ 7.00 ಮೀ ಎತ್ತರಕ್ಕೆ ನೀರು ಸಂಗ್ರಹಿಸಿದಲ್ಲಿ ಮುಳುಗಡೆಯಾಗುವ ಜಮೀನಿನ ಸರ್ವೆ ಕಾರ್ಯ ಪ್ರಗತಿಯಲ್ಲಿರುತ್ತದೆ. ನಗರಕ್ಕೆ 24/7 ನೀರು ಪೂರೈಕೆ ಯೋಜನೆಯನ್ನು 'ಜಲಸಿರಿ' ಯೋಜನೆಯಲ್ಲಿ ಕೈಗೊಳ್ಳಲಾಗುವುದರಿಂದ ಸ್ಮಾರ್ಟ್‌ಸಿಟಿ ಯೋಜನೆಯಲ್ಲಿ ಸೇರಿಸಲು ಪ್ರಸ್ತಾವನೆ ಇರುವುದಿಲ್ಲ.<br><br>24x7 ನೀರು ಪೂರೈಕೆ ಯೋಜನಾ ವೆಚ್ಚ ಒಟ್ಟು ರೂ. 792.42 ಕೋಟಿ (8 ವರ್ಷಗಳ ಅವಧಿಗೆ ಕಾರ್ಯ ಮತ್ತು ಪಾಲನೆ ವೆಚ್ಚ ಸೇರಿ). ಕಾರ್ಯ ಮತ್ತು ಪಾಲನೆಯ ವೆಚ್ಚ ಹೊರತುಪಡಿಸಿ ಒಟ್ಟು ಯೋಜನೆಗೆ ತಗಲುವ ವೆಚ್ಚ ರೂ.587.67 ಕೋಟಿ. |
| ಇ) | ಮಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಬಿಲ್ಲು ಪಾವತಿಸದೇ ಇರುವ ಕಮರ್ಷಿಯಲ್ ಮತ್ತು ವಾಣಿಜ್ಯ ಸಂಕೀರ್ಣಗಳ ವಿವರ ನೀಡುವುದು ವಸೂಲು ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ಮಂಗಳೂರು ಮಹಾನಗರಪಾಲಿಕೆ ವ್ಯಾಪ್ತಿಯಲ್ಲಿ ಕುಡಿಯುವ ನೀರಿನ ಬಿಲ್ಲು ಪಾವತಿಸದೇ ಇರುವ ಕಮರ್ಷಿಯಲ್ ಮತ್ತು ವಾಣಿಜ್ಯ ಸಂಕೀರ್ಣಗಳ ಒಟ್ಟು 893 ಪ್ರಕರಣಗಳಿದ್ದು, ರೂ.6,60,07,951.00 ಮೊತ್ತ ವಸೂಲಾತಿಗೆ ಬಾಕಿ ಇರುವುದು. ಮಂಗಳೂರು ಮಹಾನಗರಪಾಲಿಕೆಯಿಂದ ವಾರ್ಡ್‌ವಾರು ಇಂಜಿನಿಯರ್‌ಗಳ ತಂಡವನ್ನು ರಚಿಸಿ, ವಸೂಲಾತಿಗೆ ಕ್ರಮ ವಹಿಸಲಾಗುತ್ತಿದೆ. |

ಕಡತ ಸಂಖ್ಯೆ: ನಅಇ 105 ಎಸ್.ಎಫ್.ಸಿ 2020

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು.